# ಕರ್ನಾಟಕ ವಿಧಾನ ಪರಿಷತ್

ಸದಸ್ಯರ ಹೆಸರು: ಶ್ರೀ ಕೆ.ಟಿ. ಶ್ರೀಕಂಠೇಗೌಡ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 69

ಉತ್ತರಿಸುವ ಸಚಿವರು ಮಾನ್ಯ ಕೃಷಿ ಸಚಿವರು

ಉತ್ತರಿಸಬೇಕಾದ ದಿನಾಂಕ: 15-07-2019

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ವಿ.ಸಿ. ಫಾರಂ ಕೃಷಿ ಕೇಂದ್ರ, ಮಂಡ್ಯ ಇದರ ಒಟ್ಟು ವಿಸ್ತೀರ್ಣ ಎಷ್ಟು? | ಕೃಷಿ ವಿ.ಸಿ. ಫಾರಂ ಕೃಷಿ ಕೇಂದ್ರ, ಮಂಡ್ಯ ಇದರ ಒಟ್ಟು ವಿಸ್ತೀರ್ಣ 655.02 ಎಕರೆ. |
| ಆ) | ಈ ಕೇಂದ್ರದ ಜಮೀನನ್ನು ಅಕ್ಕಪಕ್ಕದ ಗ್ರಾಮಸ್ಥರು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಒತ್ತುವರಿ ಮಾಡಲಾಗಿರುವ ಜಮೀನು ಎಷ್ಟು; | ಸುಮಾರು 5.25 ಎಕರೆ ವಿಸ್ತೀರ್ಣ |
| ಈ) | ಈ ಒತ್ತುವರಿ ತೆರವಿಗೆ ಸರ್ಕಾರ ಕೈಗೊಂಡ ಅಗತ್ಯ ಕ್ರಮಗಳೇನು? | ಸರ್ವೆ ನಂ. 100 ರಲ್ಲಿ 194.19 ಎಕರೆ ಜಮೀನು ಮೂಲತಃ ಸರ್ಕಾರಿ ಗೋಮಾಳವಾಗಿದ್ದು, ಇದರ ಪೈಕಿ 141.32 ಎಕರೆ ಜಮೀನನ್ನು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಹೆಸರಿಗೆ ಎಂ.ಆರ್39/2005-06 ಪ್ರಕಾರ ಮ್ಯೂಟೇಷನ್ ಅಂಗೀಕಾರವಾಗಿ ಆರ್.ಟಿ.ಸಿ. ಬಂದಿರುತ್ತದೆ. ಇದರ ಪೈಕಿ 5.25 ಎಕರೆ ಜಮೀನನ್ನು ಅಕ್ಕಪಕ್ಕದ ರೈತರು ಅಕ್ರಮ ದಾಖಲೆಗಳನ್ನು ನೀಡಿ, ತಹಶೀಲ್ದಾರ್ ರವರಿಂದ ಮಂಜೂರು ಮಾಡಿಸಿಕೊಂಡು (ನಂ.ಎಲ್.ಎನ್.ಡಿ.ಸಿ.ಆರ್.37/86-87) ಸಾಗುವಳಿ ಮಾಡಲಾಗುತ್ತಿತ್ತು. ಈ ಕುರಿತು ನ್ಯಾಯಾಲಯದಲ್ಲಿ ದಾವೆ ಸಲ್ಲಿಸಿದ್ದು, ಸಂಖ್ಯೆ: ಆರ್.ಎ. 9-11/2010-11 ಪ್ರಕಾರ ಸರ್ವೆ ನಂಬರ್ 100ಕ್ಕೆ ಸಂಬಂಧಿಸಿದಂತೆ ಉಪ ವಿಭಾಗಾಧಿಕಾರಿ, ಉಪ ವಿಭಾಗ, ಮಂಡ್ಯ ಇವರ ನ್ಯಾಯಾಲಯದಲ್ಲಿ ಕೂಲಂಕಷವಾಗಿ |

| | | |
|---|---|---|
| | | ಪರಿಶೀಲಿಸಿ, ತಾಲ್ಲೂಕು ಸರ್ವೆಯರ್ ರವರಿಂದ ಅಳತೆ ಮಾಡಿಸಿ, ನಕ್ಷೆ ತಯಾರಿಸಿ ಪ್ರತಿವಾದಿಗಳಿಗೆ ಮಂಜೂರಾಗಿರುವುದು ಅರೆ ವ್ಯಾಪ್ತಿಯಾಗಿದ್ದಲ್ಲಿ, ರದ್ದುಗೊಳಿಸುವ ಬಗ್ಗೆ ಸಕ್ಷಮ ಪ್ರಾಧಿಕಾರದ ಮುಂದೆ ಪ್ರಸ್ತಾವನೆ ಸಲ್ಲಿಸಲು ನಿಯಮಾನುಸಾರ ಕ್ರಮ ವಹಿಸಲು ಮಂಡ್ಯ ತಹಶೀಲ್ದಾರ್ ರವರಿಗೆ ದಿನಾಂಕ:04-12-2012 ರಂದು ನಿರ್ದೇಶನ ನೀಡಲಾಗಿದೆ.<br><br>ಆದರನ್ವಯ ಉಪ ವಿಭಾಗಾಧಿಕಾರಿಗಳ ಆದೇಶವನ್ನು ಪ್ರತಿವಾದಿಗಳು ಪ್ರಶ್ನಿಸಿ, ಜಿಲ್ಲಾಧಿಕಾರಿಯವರಿಗೆ ಸಲ್ಲಿಸಿದ್ದ ದಾವೆಯ ಕುರಿತು ಜಿಲ್ಲಾಧಿಕಾರಿಗಳು ನೀಡಿರುವ ಆದೇಶವನ್ನು ಪಾಲಿಸದ ತಹಶೀಲ್ದಾರ್‌ರವರ ಕ್ರಮದ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲಿಸಲಾಗಿರುತ್ತದೆ. ಈ ಸಂಬಂಧವಾಗಿ ಮಾನ್ಯ ನ್ಯಾಯಾಲಯವು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮಂಡ್ಯ ತಾಲ್ಲೂಕು ಇವರಿಗೆ ಜಮೀನಿನ ಪೋಡಿ ದುರಸ್ಥಿ ಕಾರ್ಯ ಮಾಡುವಂತೆ ತೀರ್ಪು ನೀಡಲಾಗಿರುವ ಮೇರೆಗೆ ಭೂದಾಖಲೆಗಳ ಸಹಾಯಕ ನಿರ್ದೇಶಕರು ಪ್ರಶ್ನಿತ ಜಮೀನಿನ ನಮೂನೆ-1-5 ರಲ್ಲಿ ಭರ್ತಿ ಮಾಡಿದ ಮಂಜೂರಿದಾರರ ಮೂಲ ಕಡತಗಳನ್ನು ಕಳುಹಿಸಿಕೊಡುವಂತೆ ಕೋರಿರುವುದಾಗಿದೆ. ಇದಲ್ಲದೆ ಹಲವಾರು ಪತ್ರ ವ್ಯವಹಾರಗಳನ್ನು ಮಾಡಿದ್ದಾಗ್ಯೂ ತಹಶೀಲ್ದಾರ್ ರವರು ನಮೂನೆ 1-5ನ್ನು ಇದುವರೆವಿಗೂ ತಯಾರಿಸಿ ಭೂದಾಖಲೆಗಳ ಸಹಾಯಕರಿಗೆ ತಲುಪಿಸಿರುವುದಿಲ್ಲ. ಆದ್ದರಿಂದ ಉಚ್ಚ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಲಾಗಿದೆಯೆಂಬ ನ್ಯಾಯಾಂಗ ನಿಂಧನೆ ಮೊಕದ್ದಮೆ ಹೂಡಲು ಕ್ರಮ ವಹಿಸಲು ನಿರ್ಧರಿಸಲಾಗಿರುತ್ತದೆ. |

ಸಂಖ್ಯೆ: ಕೃಇ 22 ಕೃವಿಬಿ 2019

(ಎನ್.ಹೆಚ್.ಶಿವಶಂಕರರೆಡ್ಡಿ)

ಕೃಷಿ ಸಚಿವರು